ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ: 14ನೇ ಡಿಸೆಂಬರ್, 2020

ಸಹಾಯಕ ಪ್ರಾಧ್ಯಾಪಕರುಗಳ ನೇಮಕಾತಿ ಕುರಿತು

ಶ್ರೀ ಅ. ದೇವೇಗೌಡ (ಪದವೀಧರರ ಕ್ಷೇತ್ರ):-

533(597) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) 2015ನೇ ಸಾಲಿನಲ್ಲಿ ಅಧಿಸೂಚನೆಗೊಂಡ ಸಹಾಯಕ ಪ್ರಾಧ್ಯಾಪಕರ ನೇಮಕಾತಿ 2017ನೇ ಜನವರಿಯಲ್ಲಿ ಮೊದಲ ಪಟ್ಟಿಯಲ್ಲಿ 1960 ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡಲಾಗಿದ್ದು ಭರ್ತಿಯಾಗದ 100ಕ್ಕೂ ಹೆಚ್ಚು ಹುದ್ದೆಗಳಿಗೆ ಬದಲಿ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಸಲುವಾಗಿ 28.03.2019ರಲ್ಲಿ ಹೆಚ್ಚುವರಿ ಅಭ್ಯರ್ಥಿಗಳ ಆಯ್ಕೆ ಪಟ್ಟಿಯನ್ನು ಅಧಿಸೂಚಿಸಿದ್ದು, ಈವರೆವಿಗೂ ನೇಮಕಾತಿ ಆದೇಶ ನೀಡದಿರಲು ಕಾರಣವೇನು ;

(ಆ) ನೇಮಕಾತಿ ಪ್ರಕ್ರಿಯೆಯಲ್ಲಿ ಉಂಟಾದ ವಿಳಂಬದಿಂದಾಗಿ 28.03.2019 ರಂದು ಪ್ರಕಟಣೆಗೊಂಡ ಪಟ್ಟಿಯು ಅಧಿಸೂಚಿಸಿದ್ದರೂ ಪ್ರಕ್ರಿಯೆ ವಿಳಂಬವಾದ ಕಾರಣ ಅಮಾನ್ಯಗೊಂಡಿದ್ದು, 2020ರ ಜೂನ್ ತಿಂಗಳಲ್ಲಿ `'ಸಚಿವ ಸಂಪುಟ ಸಭೆ''ಯಲ್ಲಿ ನೇಮಕಾತಿ ಕಾಯ್ದೆಗೆ ತಿದ್ದುಪಡಿ ಮಾಡಿ ಸದರಿ ಪಟ್ಟಿಗೆ 2 ವರ್ಷಗಳ ಮಾನ್ಯತೆ ನೀಡಿದ್ದು ಈ ಮಾನ್ಯತೆಯು ಮಾರ್ಚ್-2021ಕ್ಕೆ ಅಮಾನ್ಯವಾಗಲಿದೆಯೇ;

(ಇ) 2017ರ ಪಟ್ಟಿಯಲ್ಲಿ ನೇಮಕಾತಿಯ ಹಲವು ಅಭ್ಯರ್ಥಿಗಳು ವಯೋಮಿತಿ ಮೀರಿದ್ದು ನೇಮಕಾತಿಗೊಳ್ಳದಿದ್ದಲ್ಲಿ ಅವರುಗಳು ಅತಂತ್ರವಾಗುವ ಸಾಧ್ಯತೆ ಇರುವುದರಿಂದ ಸರ್ಕಾರ ಕೈಗೊಂಡಿರುವ ಕ್ರಮವೇನು ?